**ಕರ್ನಾಟಕ ವಿಧಾನ ಪರಿಷತ್ತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 550
ಸದಸ್ಯರ ಹೆಸರು : ಶ್ರೀ ಪ್ರದೀಪ್ ಶೆಟ್ಟರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ).
ಉತ್ತರಿಸುವ ದಿನಾಂಕ : 05-02-2021.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಧಾರವಾಡ, ಗದಗ, ಹಾವೇರಿ ಜಿಲ್ಲೆಯಲ್ಲಿ ಬರುವ ಗ್ರಾಮ ಪಂಚಾಯಿತಿಗಳಲ್ಲಿ ಎಷ್ಟು ಪಂಚಾಯಿತಿ ಕಛೇರಿಗಳು ಸ್ವಂತ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ; | ಧಾರವಾಡ ಜಿಲ್ಲೆ ವ್ಯಾಪ್ತಿಯಲ್ಲಿ ಬರುವ 144 ಗ್ರಾಮ ಪಂಚಾಯತಿಗಳು ಸ್ವಂತ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ.<br><br>ಗದಗ ಜಿಲ್ಲೆ ವ್ಯಾಪ್ತಿಯಲ್ಲಿ ಬರುವ 122 ಗ್ರಾಮ ಪಂಚಾಯತಿಗಳಲ್ಲಿ 95 ಗ್ರಾಮ ಪಂಚಾಯತಿಗಳು ಸ್ವಂತ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಇನ್ನುಳಿದ 27 ಗ್ರಾಮ ಪಂಚಾಯತಿಗಳು ಇತರೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ.<br><br>ಹಾವೇರಿ ಜಿಲ್ಲೆ ವ್ಯಾಪ್ತಿಯಲ್ಲಿ ಬರುವ 223 ಗ್ರಾಮ ಪಂಚಾಯತಿಗಳು ಸ್ವಂತ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. |
| (ಆ) | 2018 ರಿಂದ 2020 ನೇ ಸಾಲಿನವರೆಗೆ ಗ್ರಾಮ ಪಂಚಾಯಿತಿಗಳಲ್ಲಿ ಪಂಚಾಯಿತಿ ಕಛೇರಿಗಳ ಕಟ್ಟಡಗಳ ನಿರ್ಮಾಣ ಮಾಡಲು ಬಿಡುಗಡೆಯಾದ ಅನುದಾನದ ಮೊತ್ತವೆಷ್ಟು; | ಧಾರವಾಡ ಜಿಲ್ಲೆಗೆ ಗ್ರಾಮ ಪಂಚಾಯತಿ ಕಛೇರಿ ಕಟ್ಟಡ ನಿರ್ಮಾಣಕ್ಕಾಗಿ ರೂ. 54.00 ಲಕ್ಷಗಳು, ಗದಗ ಜಿಲ್ಲೆಗೆ ರೂ.50.00 ಲಕ್ಷಗಳು ಮತ್ತು ಹಾವೇರಿ ಜಿಲ್ಲೆಗೆ 205.11 ಲಕ್ಷಗಳ ಅನುದಾನ ಬಿಡುಗಡೆಯಾಗಿರುತ್ತದೆ. |
| (ಇ) | ಬಾಡಿಗೆ ಕಟ್ಟಡಗಳಲ್ಲಿ ಕಾರ್ಯ ನಿರ್ವಹಣೆ ಮಾಡುತ್ತಿರುವ ಕಟ್ಟಡಗಳಲ್ಲಿ ಸ್ವಂತ ಕಟ್ಟಡಗಳ ನಿರ್ಮಾಣ ಮಾಡಲು ಕೈಗೊಂಡಿರುವ ಕ್ರಮಗಳೇನು? | ಹೊಸದಾಗಿ ರಚನೆಯಾದ ಗ್ರಾಮ ಪಂಚಾಯತಿ ಕಛೇರಿಗೆ ರೂ 40.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕಟ್ಟಡಗಳನ್ನು ನಿರ್ಮಿಸಲು ಉದ್ದೇಶಿಸಲಾಗಿದ್ದು ಈ ಪೈಕಿ ಸರ್ಕಾರದ ಅನುದಾನ ರೂ.20.00 ಲಕ್ಷ, ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಲ್ಲಿ ಕೈಗೊಳ್ಳುವ ರಾಜೀವ ಗಾಂಧಿ ಸೇವಾ ಕೇಂದ್ರ ನಿರ್ಮಾಣ ಮಾಡಲು ಮೀಸಲಿಟ್ಟಿರುವ ಅನುದಾನ ರೂ.16.25 ಲಕ್ಷ ಹಾಗೂ 14/15ನೇ ಹಣಕಾಸು ಯೋಜನೆ ಅಥವಾ ಗ್ರಾಮ ಪಂಚಾಯತಿಗಳ ಇನ್ನಿತರೆ ಅನುದಾನದಡಿ ಉಳಿಕೆಯಾಗಿರುವ ರೂ.3.75 ಲಕ್ಷಗಳನ್ನು ಬಳಸಿಕೊಳ್ಳಲು ನಿರ್ಧರಿಸಲಾಗಿರುತ್ತದೆ. |

ಸಂ. ಗ್ರಾಅಪ 57 ಗ್ರಾಪಂಅ 2021

**(ಕೆ.ಎಸ್. ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು